ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ರಾಜ್ಯ ಮತ್ತು ಕೇಂದ್ರ ಸರ್ಕಾರಿ ನೌಕರರ ವೇತನದಲ್ಲಿನ ತಾರತಮ್ಯದ ಬಗ್ಗೆ

ಶ್ರೀ ಅ. ದೇವೇಗೌಡ(ಪದವೀಧರರ ಕ್ಷೇತ್ರ) –

446 (585) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದಲ್ಲಿ 6ನೇ ವೇತನ ಆಯೋಗದ ವರದಿಯನ್ನು ಜಾರಿಗೆ ತಂದಿದ್ದರೂ ರಾಜ್ಯ ಮತ್ತು ಕೇಂದ್ರ ಸರ್ಕಾರಿ ನೌಕರರುಗಳ ವೇತನದಲ್ಲಿ ತಾರತಮ್ಯವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ದೇಶದಲ್ಲಿ ಹಲವು ರಾಜ್ಯಗಳು ಅಲ್ಲಿನ ನೌಕರರುಗಳಿಗೆ ಕೇಂದ್ರ ಸರ್ಕಾರದ ಸರ್ಕಾರಿ ನೌಕರರಿಗೆ ಸಮನಾಂತರವಾಗಿ ವೇತನ/ಪಿಂಚಣಿ ಸೌಲಭ್ಯವನ್ನು ನೀಡುತ್ತಿದ್ದು ರಾಜ್ಯದಲ್ಲಿ ಸದರಿ ಸೌಲಭ್ಯವನ್ನು ಜಾರಿಗೆ ತರದಿರಲು ಕಾರಣವೇನು;

(ಇ) ರಾಜ್ಯದ ಸರ್ಕಾರಿ ನೌಕರರಿಗೆ ಕೇಂದ್ರ ಸರ್ಕಾರಿ ನೌಕರರಿಗೆ ನೀಡುತ್ತಿರುವ ಕೇಂದ್ರದ 7ನೇ ವೇತನ ಆಯೋಗದ ಶಿಫಾರಸ್ಸುಗಳನ್ನು ಜಾರಿಗೆ ತರಲು ಯಾವ ಕ್ರಮ ಕೈಗೊಳ್ಳಲಾಗುವುದು;

(ಈ) ಈ ರೀತಿ ವೇತನ ತಾರತಮ್ಯವನ್ನು ನಿವಾರಿಸುವುದರಿಂದ ಆಡಳಿತದಲ್ಲಿ ದಕ್ಷತೆಯನ್ನು ಹೆಚ್ಚಿಸಿ ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಬಹುದಲ್ಲವೇ;

(ಉ) ಕರ್ನಾಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಖಿಲ ಭಾರತ ಸೇವೆಯ ಅಧಿಕಾರಿಗಳಿಗೆ ಈಗಾಗಲೇ 7ನೇ ವೇತನ ಆಯೋಗದ ಶಿಫಾರಸ್ಸಿನಡಿಯಲ್ಲಿ ಸಂಬಳ ಸೌಲಭ್ಯವನ್ನು ನೀಡುತ್ತಿರುವುದರಿಂದ ಅವರ ಕೈಕೆಳಗೆ ಹೆಚ್ಚಿನ ಜವಾಬ್ದಾರಿಯಿಂದ ಕಾರ್ಯ ನಿರ್ವಹಿಸುತ್ತಿರುವ ರಾಜ್ಯ ಸರ್ಕಾರಿ ನೌಕರರುಗಳಿಗೆ ಈ ತಾರತಮ್ಯದಿಂದ ಅನ್ಯಾಯವಾಗವುದಿಲ್ಲವೇ;

(ಊ) ಈ ಅನ್ಯಾಯವನ್ನು ಯಾವಾಗ ಸರಿಪಡಿಸಲಾಗುವುದು?